KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಅಕ್ಟೋಬರ್ ೧, ೨೦೦೯ (ಆಶ್ವಯುಜ ೯, ಶಕ ವರ್ಷ ೧೯೩೧) | ಸಂಚಿಕೆ ೩೯ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–02/08–09, ದಿನಾಂಕ:25ನೇ ಜುಲೈ, 2009**

**ಉಪಸ್ಥಿತರು :** ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ,
ಸಾಗರ ವಲಯ, ಸಾಗರ.
(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು :** ಪತ್ತೆಯಾಗಿರುವುದಿಲ್ಲ

**ಬಾಧ್ಯತೆದಾರರು :** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:04.05.2008ರಂದು ಸಾಗರ ವಲಯದ ತ್ಯಾಗರ್ತಿ ಶಾಖೆಯ ವನಪಾಲಕರು ಹಾಗೂ ಸಿಬ್ಬಂದಿಯವರು ಮತ್ತು ರಾತ್ರಿ ಗಸ್ತಿನ ಸಿಬ್ಬಂದಿಯವರು ಸಾಗರ ತಾಲ್ಲೂಕು ಕಸಬಾ ಹೋಬಳಿ ಬಿಳಿಸಿರಿ ಗ್ರಾಮದ ಮೈನರ್ ಫಾರೆಸ್ಟ್‌ನಲ್ಲಿರುವ ಸಾಗುವಾನಿ ನೆಡುತೋಪಿನಲ್ಲಿ ಗಸ್ತು ಮಾಡುತ್ತಿರುವಾಗ ಬೆಳಿಗ್ಗೆ 6–15ರ ಸಮಯದಲ್ಲಿ ನೆಡುತೋಪಿನ ಒಳಗೆ ವಾಹನಕ್ಕೆ ಏನೋ ಲೋಡ್ ಮಾಡುವ ಸದ್ದು ಕೇಳಿಸಿತು. ಆ ದಿಕ್ಕಿಗೆ ವಾಹನದ ಹತ್ತಿರ ಇಲಾಖೆಯವರು ಹೋಗುವಷ್ಟರಲ್ಲಿ ವಾಹನಕ್ಕೆ ನಾಟಾವನ್ನು ತುಂಬುತ್ತಿದ್ದ ಐದಾರು ಜನರು ಓಡಿ ಪರಾರಿಯಾಗಿರುತ್ತಾರೆ. ಮುಂದುವರೆದು, ಇಲಾಖೆಯವರು ವಾಹನದ ಹತ್ತಿರ ಹೋಗಿ ನೋಡಲಾಗಿ ಟಾಟಾ ಏಸ್ ನಂಬರ್: ಕೆಎ–14–ಎ–2895, ಇಂಜಿನ್ ನಂಬರ್: 2751-D-105-FSZ-536824, ಛಾಸ್ಸಿಸ್ ನಂಬರ್: 445051-FSZR-38795 ಮತ್ತೊಂದು ವಾಹನ ಬಜಾಜ್ ಸಿಟಿ–100 ನಂಬರ್:ಕೆಎ–04–ಇಜೆ–3615, ಇಂಜಿನ್ ನಂಬರ್ DUMBLF-55992, ಛಾಸ್ಸಿಸ್ ನಂಬರ್:DUFBLF 33628 ಆಗಿದ್ದು, ಟಾಟಾ ಏಸ್ ವಾಹನದೊಳಗೆ ವಾಹನ ನಿಂತಲ್ಲಿಂದ ಅಕ್ಕಪಕ್ಕದಲ್ಲಿ 5 ಸಾಗುವಾನಿ ಮರಗಳಿಂದ ತಯಾರಿಸಿದ ಸಾಗುವಾನಿ ನಾಟಾ 14=0.637ಎಂ3 ಇದ್ದು, ಈ ನಾಟಾಗಳ ಮೇಲೆ ಯಾವುದೇ ಇಲಾಖಾ ಛಾಪಾವಾಗಲೀ, ಅದನ್ನು ಸಾಗಿಸಲು ರಹದಾರಿಯಾಗಲೀ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಸಾಗರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:07/08–09ನ್ನು ದಾಖಲಿಸಿ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ

ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ:15.05.2008ರಂದು ಆದೇಶವಾಗಿದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಯಶವಂತಪುರಂ (ಉತ್ತರ) ಬೆಂಗಳೂರು ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–02/08–09 ದಿನಾಂಕ:22.05.2008 ರಂದು ಪತ್ರ ಬರೆದು ಕೋರಲಾಯಿತು. ಆದರೆ ಅವರಿಂದ ಇಲ್ಲಿಯವರೆವಿಗೂ ಯಾವುದೆ ಮಾಹಿತಿ ಈ ನ್ಯಾಯಾಲಯಕ್ಕೆ ಬಂದಿರುವುದಿಲ್ಲ. ಮುಂದಿನ ದಿನಗಳಲ್ಲಿ ಸದರಿ ವಾಹನದ ಬಗ್ಗೆ ಆರ್.ಸಿ. ಮಾಲೀಕರು ನ್ಯಾಯಾಲಯಕ್ಕೆ ಮೊರೆಹೋದಲ್ಲಿ ಸಾರಿಗೆ ಅಧಿಕಾರಿ, ಬೆಂಗಳೂರು ಇವರೇ ನೇರ ಹೊಣೆಗಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ 30 ದಿನಗಳ ಕಾಲಾವಕಾಶ ನೀಡಿ ವಾಹನದ ದಾಖಲೆಗಳನ್ನು ಒದಗಿಸುವಂತೆ ಅಧಿಸೂಚನೆ ಸಂಖ್ಯೆ: ಬಿ3:ಅಮೊ:ವಾಹನ–01/08–09 ದಿನಾಂಕ:02.07.2008 ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಿಕೊಡಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ:02.07.2008 ರಂದು ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:18.07.2009ರಂದು ವಾದ ಮಂಡಿಸಿ ಈ ವಾಹನದಲ್ಲಿ ಸಾಗುವಾನಿ ನಾಟಾಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದರಿಂದ ಈ ವಾಹನದಲ್ಲಿ ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಈ ವಾಹನದ ಬಗ್ಗೆ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿ 30 ದಿನಗಳಿಗಿಂತಲೂ ಹೆಚ್ಚು ಕಾಲವಾಗಿದ್ದರೂ ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ನ್ಯಾಯಾಲಯಕ್ಕೆ ಕ್ಲೈಮು ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ, ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿದ್ದು, ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಂಡು, ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ ಇವರು ಜಪ್ತಿ ಮಾಡಿದ ವಾಹನ ಬಜಾಜ್ ಸಿಟಿ 100 ಬೈಕ್ ಕೆಎ–04–ಇಜೆ–3615 ನ್ನು (ಇಂಜಿನ್ ನಂಬರ್DUMBLF-55992, ಛಾಸ್ಸಿಸ್ ನಂ. DUFLF-33628) ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಸಾಗುವಾನಿ ನಾಟಾ 14=0.637ಎಂ3ನ್ನು ಜೊತೆಯಲ್ಲಿದ್ದ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ವಾಹನ ಬಜಾಜ್ ಸಿಟಿ 100 ಬೈಕ್ ಕೆಎ–04–ಇಜೆ–3615ನ್ನು (ಇಂಜಿನ್ ನಂಬರ್DUMBLF-55992, ಛಾಸ್ಸಿಸ್ ನಂ. DUFLF-33628)ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:25.07.2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.733

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ನಂ.369/2008–09, ದಿನಾಂಕ: 31–07–2009**

**ಅಸಇ. ನಂ.1/ಚಿವ/ಪ್ರ.ವ.ವ. ನಂ.18/2008–09, ದಿನಾಂಕ: 24–04–2009**

**ಉಪಸ್ಥಿತರು:** ಕೆ.ಸಿ. ಹರಿದಾಸ್

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಅಬಕಾರಿ ಉಪ ನಿರೀಕ್ಷಕರು, ನಂ.1 ಚಿಕ್ಕಮಗಳೂರು ವಲಯ. | ಆರೋಪಿ ತಿಳಿದು ಬಂದಿರುವುದಿಲ್ಲ |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:24.04.2009 ರಂದು ಸಂಜೆ ಸುಮಾರು 4.30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು ನಂ.1, ಚಿಕ್ಕಮಗಳೂರು ವಲಯ ಇವರು ಸಿಬ್ಬಂದಿ ಮತ್ತು ಪಂಚಾಯ್ತಿದಾರರೊಂದಿಗೆ, ಚಿಕ್ಕಮಗಳೂರಿನಿಂದ ಮರ್ಲೆ ತಿಮ್ಮನಹಳ್ಳಿಗೆ ಹೋಗುವ ರಸ್ತೆಯಲ್ಲಿ ಗಸ್ತು ನಿರ್ವಹಿಸುತ್ತಿದ್ದಾಗ ಒಂದು ಲೂನಾ ಮೊಪೆಡ್ ವಾಹನ ನಿಂತಿದ್ದು, ವಾಹನದಲ್ಲಿ ಬಟ್ಟೆ ಚೀಲದೊಳಗೆ ಒಂದು ಚೌಕಟ್ಟಾದ ಬಾಕ್ಸ್ ಇರುವುದನ್ನು ಗಮನಿಸಿ ಅನುಮಾನದ ಮೇರೆಗೆ ವಾಹನದ ಬಳಿ ತೆರಳಿ ತಪಾಸಣೆ ಮಾಡಲಾಗಿ ಬಟ್ಟೆ ಚೀಲದೊಳಗೆ 180 ಮಿಲಿಯ 48 ಸೀಸೆ ನಂ.1 ಹೈವೇ ವಿಸ್ಕಿ ಬಾಟಲಿಗಳು ಇದ್ದು ಇವುಗಳ ಸಾಗಾಣಿಕೆಗೆ ಸಂಬಂಧಿಸಿದಂತೆ ಯಾವುದೇ ಅಧಿಕೃತ ರಹದಾರಿ ಪತ್ರಗಳನ್ನಾಗಲಿ ಅಥವಾ ದಾಖಲಾತಿ ಪತ್ರಗಳನ್ನಾಗಲಿ ಹಾಜರುಪಡಿಸಲು ಸ್ಥಳದಲ್ಲಿ ಯಾರು ಇಲ್ಲದೆ ಇದ್ದುದರಿಂದ, ಅಕ್ರಮವಾದುದೆಂದು ದೃಢಪಡಿಸಿಕೊಂಡು, ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ದೊರೆತ ಮದ್ಯವನ್ನು ವಾಹನ ಸಂಖ್ಯೆ: ಕೆ.ಎ. 09 ಕೆ: 6163 (ಲೂನಾ ಸೂಪರ್ ಮೊಪೆಡ್)ನೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಕ್ರೈಂ ನಂ.18/2008–09 ರಲ್ಲಿ ಪ್ರಕರಣವನ್ನು ದಾಖಲಿಸಿ ತನಿಖೆ ಮುಂದುವರೆಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಕ್ರಮವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮೈಸೂರು ಮತ್ತು ಚಿಕ್ಕಮಗಳೂರು ಇವರಿಗೆ ಪತ್ರ ಬರೆದು ನಡವಳಿಗಳನ್ನು ಮುಂದುವರೆಸಲಾಯಿತು.

ವಾಹನವು ಜಫ್ತಾಗಿ ಸುಮಾರು ಒಂದುವರೆ ತಿಂಗಳು ಕಳೆದರೂ ಈ ಅವಧಿಯಲ್ಲಿ ವಾಹನದ ಕಾನೂನು ಬದ್ಧ ವಾರಸುದಾರರಾಗಲಿ ಅಥವಾ ವಾಹನದ ಮಾಲೀಕರಾಗಲೀ ಯಾರೊಬ್ಬರು ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ಹಕ್ಕು ಸಾಧಿಸದೆ ಇದ್ದುದರಿಂದ, ಅಂತಿಮವಾಗಿ ವಾಹನದ ಮಾಲೀಕರಿಗೆ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಹಾಜರಾಗಿ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಿ ವಾಹನದ ಮೇಲೆ ಹಕ್ಕು ಸಾಧಿಸಲು ಏಳು ದಿನಗಳ ಕಾಲಾವಕಾಶ ನೀಡಿ, **"ಸಂಬಂಧಿಸಿದವರ ತಿಳುವಳಿಕೆಗಾಗಿ"** ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪತ್ರಿಕಾ ಪ್ರಕಟಣೆ ದಿನಾಂಕ:10.06.2009 ರಂದು ರಾಜ್ಯ ಮಟ್ಟದ ದಿನಪತ್ರಿಕೆಯಾದ ವಿಜಯ ಕರ್ನಾಟಕ ಮತ್ತು ಜಿಲ್ಲಾ ಮಟ್ಟದ ದಿನಪತ್ರಿಕೆಯಾದ ಜನಮಿತ್ರ ಪತ್ರಿಕೆಯಲ್ಲಿ ಪ್ರಚುರಗೊಂಡಿರುತ್ತದೆ. ಪ್ರಚುರಗೊಂಡ ನಂತರದಲ್ಲೂ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಲಿಖಿತ ಮನವಿಯನ್ನು ಸಲ್ಲಿಸಿರುವುದಿಲ್ಲ.

ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಮೊಕದ್ದಮೆಯ ಕೃತ್ಯವು ವಾಹನದ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನವು ಜಫ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದರಿಂದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965 ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965 ರ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು

ಹಾಕಿಕೊಳ್ಳಲು ಬಾದ್ಯವಾಗಿದ್ದಲ್ಲಿ, ಯಾರೊಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಕೆಳಕಂಡ ಆದೇಶ.

**"ಆದೇಶ "**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಸಇ. ನಂ.1/ಚಿವ/ಪ್ರ.ವ.ವ. ನಂ.18/2008–09, ದಿನಾಂಕ:24.04.2009 ರಲ್ಲಿ ವಶಪಡಿಸಿಕೊಳ್ಳಲಾದ ವಾಹನ ಸಂಖ್ಯೆ: ಕೆಎ–09–ಕೆ–6163 (ಲೂನಾ ಸೂಪರ್ ಮೊಪೆಡ್) ಹಾಗೂ ಮದ್ಯದ ಪೈಕಿ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 8.460 ಲೀಟರ್ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 31ನೇ ಜುಲೈ 2009 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.785

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ನಂ.191/2008–09, ದಿನಾಂಕ:31ನೇ ಜುಲೈ, 2009**

ಪೊಲೀಸ್ ಉಪ ನಿರೀಕ್ಷಕರು ಬಾಳೆಹೊನ್ನೂರು ಪೊಲೀಸ್ ಠಾಣೆ ಇವರ ಕ್ರೈಂ ನಂ.11/2008, ದಿನಾಂಕ:27.11.2008

**ಉಪಸ್ಥಿತರು:** ಕೆ.ಸಿ. ಹರಿದಾಸ್
ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಪೊಲೀಸ್ ಉಪ ನಿರೀಕ್ಷಕರು ಬಾಳೆಹೊನ್ನೂರು ಪೊಲೀಸ್ ಠಾಣೆ. | ಆರೋಪಿ ಓಡಿ ಹೋಗಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:27.11.2008 ರಂದು ಪೊಲೀಸ್ ಉಪ ನಿರೀಕ್ಷಕರು, ಬಾಳೆಹೊನ್ನೂರು ಪೊಲೀಸ್ ಠಾಣೆ ಇವರು ಸಿಬ್ಬಂದಿ ಮತ್ತು ಪಂಚಾಯ್ತಿದಾರರೊಂದಿಗೆ, ಪಿ.ಸಿ. ಮಧ್ವರಾಜ್ ಎಂಬುವರು ಕ್ರೈಂ ನಂ.11/2008ರಲ್ಲಿ ನೀಡಿದ ಪಿರ್ಯಾದಿನ ತನಿಖೆಗಾಗಿ ಖಾಂಡ್ಯ ಹೋಬಳಿ ದೇವದಾನ ಗ್ರಾಮಕ್ಕೆ ಸೇರಿದ ಎಲೆಕಲ್ ಸೇತುವೆ ಹತ್ತಿರ ಟಾರ್ ರಸ್ತೆಯ ಬಳಿ ತೆರಳಿ, ಪಿರ್ಯಾದಿನ ಸಾರಾಂಶದ ಪ್ರಕಾರ ಈ ದಿನ ಬೆಳಿಗ್ಗೆ 8.15 ಸಮಯದಲ್ಲಿ ಸಹಕಾರ ಸಾರಿಗೆಯ ಕಂಪನಿಯ ಬಸ್ ಸಂಖ್ಯೆ: ಕೆಎ18–ಎ–8989 ಅನ್ನು ಎಲೆಕಲ್ಲು ತಿರುವಿನಲ್ಲಿ ಚಾಲನೆ ಮಾಡಿಕೊಂಡು ಬಾಳೆಹೊನ್ನೂರು ಕಡೆಗೆ ಬರುತ್ತಿದ್ದಾಗ, ಎದುರುಗಡೆಯಿಂದ ಕೆಎ–03–ಎನ್–6696 ನೊಂದಣಿ ಸಂಖ್ಯೆಯ ಮಾರುತಿ ಕಾರ್ ಚಾಲಕನು, ಕಾರನ್ನು ಅತಿ ವೇಗ ಮತ್ತು ಅಜಾಗರೂಕತೆಯಿಂದ ಚಾಲನೆ ಮಾಡಿಕೊಂಡು ಬಂದು ಬಸ್‌ಗೆ ಡಿಕ್ಕಿ ಹೊಡೆಸಿದ ಪರಿಣಾಮ, ಬಸ್‌ನ ಮುಂಭಾಗ ಮತ್ತು ಪಕ್ಕದ ಬಾಡಿ ಜಖಂಗೊಂಡಿದ್ದು, ನಂತರ ಕಾರ್‌ನಲ್ಲಿದ್ದ ಆರೋಪಿ ಚಾಲಕನು ಓಡಿ ಹೋಗಿದ್ದು, ಕಾರ್‌ನೊಳಗೆ ನೋಡಲಾಗಿ ಬ್ರಾಂಡಿ ಬಾಕ್ಸ್‌ಗಳಿದ್ದು, ಇವುಗಳನ್ನು ಅಕ್ರಮವಾಗಿ ಸಾಗಿಸುತ್ತಿದ್ದುದಾಗಿ ನೀಡಿದ ದೂರನ್ನಾಧರಿಸಿ, ಅಜಮಾಯಿಸಿ ನೋಡಲಾಗಿ ಕಾರಿನೊಳಗೆ 22 ಓಲ್ಡ್‌ಮಂಕ್ ರಂನ ಮದ್ಯದ ರಟ್ಟಿನ ಪೆಟ್ಟಿಗೆಗಳಿದ್ದು, ಅದರಲ್ಲಿ 5 ಬಾಕ್ಸ್‌ಗಳು ಚೂರಾಗಿ ಒಡೆದು ಹೋಗಿದ್ದು, ಉಳಿದ 17 ರಟ್ಟಿನ ಪೆಟ್ಟಿಗೆಗಳಲ್ಲಿ ತಲಾ ಒಂದರಲ್ಲಿ 180 ಮಿಲಿಯ 48 ಸೀಸೆಗಳಂತೆ ಒಟ್ಟು 146.880 ಲೀಟರ್ ಮದ್ಯವಿದ್ದು, ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ದೊರೆತ ಮದ್ಯವನ್ನು ಜಖಂಗೊಂಡ ವಾಹನ ಸಂಖ್ಯೆ ಕೆಎ–03–ಎನ್–6696 (ಮಾರುತಿ ಕಾರ್) ರೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ವಶಪಡಿಸಿಕೊಂಡ ವಾಹನ ಮತ್ತು ಮದ್ಯವನ್ನು ಮುಂದಿನ ವಿಲೇವಾರಿ ಕುರಿತು ಈ ಪ್ರಾಧಿಕಾರದ ಅನುಮತಿ ಪಡೆದು ಅಬಕಾರಿ ನಿರೀಕ್ಷಕರು, ಚಿಕ್ಕಮಗಳೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಕ್ರಮವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಮತ್ತು ಚಿಕ್ಕಮಗಳೂರು, ಮುಂದುವರೆದು ದಾವಣಗೆರೆ ಇವರಿಗೆ ಪತ್ರ ಬರೆದು ನಡವಳಿಗಳನ್ನು ಮುಂದುವರೆಸಲಾಯಿತು.

ವಾಹನವು ಜಫ್ತಾಗಿ ಸುಮಾರು ಒಂದು ವರ್ಷ ನಾಲ್ಕು ತಿಂಗಳು ಕಳೆದರೂ ಈ ಅವಧಿಯಲ್ಲಿ ವಾಹನದ ಕಾನೂನು ಬದ್ಧ ವಾರಸುದಾರರಾಗಲಿ ಅಥವಾ ವಾಹನದ ಮಾಲೀಕರಾಗಲೀ ಯಾರೋಬ್ಬರು ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ಹಕ್ಕು ಸಾಧಿಸದೆ ಇದ್ದುದರಿಂದ, ಅಂತಿಮವಾಗಿ ವಾಹನದ ಮಾಲೀಕರಿಗೆ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಹಾಜರಾಗಿ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಿ ವಾಹನದ ಮೇಲೆ ಹಕ್ಕು ಸಾಧಿಸಲು ಏಳು ದಿನಗಳ ಕಾಲಾವಕಾಶ ನೀಡಿ, " ಸಂಬಂಧಿಸಿದವರ ತಿಳುವಳಿಕೆಗಾಗಿ " ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪತ್ರಿಕಾ ಪ್ರಕಟಣೆ ದಿನಾಂಕ:10.06.2009 ರಂದು ರಾಜ್ಯ ಮಟ್ಟದ ದಿನಪತ್ರಿಕೆಯಾದ ವಿಜಯ ಕರ್ನಾಟಕ ಮತ್ತು ಜಿಲ್ಲಾ ಮಟ್ಟದ ದಿನಪತ್ರಿಕೆಯಾದ ಜನಮಿತ್ರ ಪತ್ರಿಕೆಯಲ್ಲಿ ಪ್ರಚುರಗೊಂಡಿರುತ್ತದೆ. ಪ್ರಚುರಗೊಂಡ ನಂತರದಲ್ಲೂ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಲಿಖಿತ ಮನವಿಯನ್ನು ಸಲ್ಲಿಸಿರುವುದಿಲ್ಲ.

ವಶಪಡಿಸಿಕೊಂಡ ಮದ್ಯದ ಪೈಕಿ ಮಾದರಿ ತೆಗೆದು ಉಳಿದ ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಿದ್ದು, ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಮೊಕದ್ದಮೆಯ ಕೃತ್ಯವು ವಾಹನದ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನವು ಜಫ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದರಿಂದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾದ್ಯವಾಗಿದ್ದಲ್ಲಿ, ಯಾರೋಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಕೆಳಕಂಡ ಆದೇಶ.

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು ಬಾಳೆಹೊನ್ನೂರು ಪೊಲೀಸ್ ಠಾಣೆ ಇವರ ಕ್ರೈಂ ನಂ.11/2008, ದಿನಾಂಕ:27.11.2008 ರಲ್ಲಿ ವಶಪಡಿಸಿಕೊಳ್ಳಲಾದ ಜಖಂಗೊಂಡ ವಾಹನ ಸಂಖ್ಯೆ ಕೆಎ–03–ಎನ್–6696 (ಮಾರುತಿ ಕಾರ್) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 31ನೇ ಜುಲೈ 2009 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.786

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ನಂ. 220/2008–09, ದಿನಾಂಕ:31ನೇ ಜುಲೈ, 2009**

ಪೊಲೀಸ್ ಉಪ ನಿರೀಕ್ಷಕರು, ತರೀಕೆರೆ ಪೊಲೀಸ್ ಠಾಣೆ, ಇವರ ಕ್ರೈ ನಂ. 97/2008, ದಿನಾಂಕ:12.05.2008

**ಉಪಸ್ಥಿತರು:** ಕೆ.ಸಿ. ಹರಿದಾಸ್

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಪೊಲೀಸ್ ಉಪ ನಿರೀಕ್ಷಕರು,<br>ತರೀಕೆರೆ ಪೊಲೀಸ್ ಠಾಣೆ. | ಚಂದ್ರಪ್ಪ ಬಿನ್ ಬೈರಪ್ಪ,<br>ದೊರನಾಳು, ತರೀಕೆರೆ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:12.05.2008 ರಂದು ಸಂಜೆ ಸುಮಾರು 7.30 ಗಂಟೆ ಸಮಯದಲ್ಲಿ ಪೊಲೀಸ್ ಉಪ ನಿರೀಕ್ಷಕರು, ತರೀಕೆರೆ ಪೊಲೀಸ್ ಠಾಣೆ ಇವರು ಸಿಬ್ಬಂದಿ ಮತ್ತು ಪಂಚಾಯ್ತಿದಾರರೊಂದಿಗೆ, ತರೀಕೆರೆ ಪಟ್ಟಣದ ಕೋಡಿಕ್ಯಾಂಪ್‌ನಲ್ಲಿರುವ ಅಲಂಕಾರ್ ಹೋಟೆಲ್ ಮುಂಭಾಗ ಗಸ್ತು ನಿರ್ವಹಿಸುತ್ತಿದ್ದಾಗ, ತರೀಕೆರೆ ಟೌನ್ ಕಡೆಯಿಂದ ಒಬ್ಬ ಅಸಾಮಿಯು ಒಂದು ಮೋಟಾರ್ ಬೈಕ್‌ನಲ್ಲಿ ಒಂದು ಬಿಳಿಯ ಪ್ಲಾಸ್ಟಿಕ್ ಚೀಲದ ಗಂಟನ್ನು ಇಟ್ಟುಕೊಂಡು ಬರುತ್ತಿರುವುದನ್ನು ಗಮನಿಸಿ, ಅನುಮಾನದ ಮೇರೆಗೆ ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ಸದರಿ ಚೀಲದಲ್ಲಿ 180 ಮಿಲಿಯ 48 ಸೀಸೆ ವಿಂಡ್ಸರ್ ಡಿಲಕ್ಸ್ ವಿಸ್ಕಿ ಬಾಟಲಿಗಳು ಇದ್ದು ಇವುಗಳ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿ ಚಂದ್ರಪ್ಪ ಬಿನ್ ಬೈರಪ್ಪ, ದೊರನಾಳು ಗ್ರಾಮ, ತರೀಕೆರೆ ತಾಲ್ಲೂಕು: ಇವರು ಯಾವುದೇ ಅಧಿಕೃತ ರಹದಾರಿ ಪತ್ರಗಳನ್ನಾಗಲಿ ಅಥವಾ ದಾಖಲಾತಿ ಪತ್ರಗಳನ್ನಾಗಲಿ ಹಾಜರುಪಡಿಸದೆ ಇದ್ದುದರಿಂದ, ಅಕ್ರಮವಾದುದೆಂದು ದೃಢಪಡಿಸಿಕೊಂಡು, ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ದೊರೆತ ಮದ್ಯವನ್ನು ವಾಹನ ಸಂಖ್ಯೆ: ಕೆಎ–14–ಹೆಚ್–9588 (ಹಿರೋಹೊಂಡ ಮೋಟಾರ್ ಸೈಕಲ್) ರೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿಗೊಳಿಸಿ ಕ್ರೈಂ ನಂ.97/2008 ರಲ್ಲಿ ಪ್ರಕರಣವನ್ನು ದಾಖಲಿಸಿ ವಶಪಡಿಸಿಕೊಂಡ ವಾಹನ ಮತ್ತು ಮದ್ಯವನ್ನು ಮುಂದಿನ ವಿಲೇವಾರಿ ಕುರಿತು ಈ ಪ್ರಾಧಿಕಾರದ ಅನುಮತಿ ಪಡೆದು ಅಬಕಾರಿ ನಿರೀಕ್ಷಕರು, ತರೀಕೆರೆ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಕ್ರಮವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಮತ್ತು ಚಿಕ್ಕಮಗಳೂರು ಇವರಿಗೆ ಪತ್ರ ಬರೆದು ನಡವಳಿಗಳನ್ನು ಮುಂದುವರೆಸಲಾಯಿತು.

ವಾಹನವು ಜಫ್ತಾಗಿ ಸುಮಾರು ಒಂದು ವರ್ಷ ಒಂದು ತಿಂಗಳು ಕಳೆದರೂ ಈ ಅವಧಿಯಲ್ಲಿ ವಾಹನದ ಕಾನೂನು ಬದ್ಧ ವಾರಸುದಾರರಾಗಲಿ ಅಥವಾ ವಾಹನದ ಮಾಲೀಕರಾಗಲೀ ಯಾರೊಬ್ಬರು ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ಹಕ್ಕು ಸಾಧಿಸದೆ ಇದ್ದುದರಿಂದ, ಅಂತಿಮವಾಗಿ ವಾಹನದ ಮಾಲೀಕರಿಗೆ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಹಾಜರಾಗಿ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಿ ವಾಹನದ ಮೇಲೆ ಹಕ್ಕು ಸಾಧಿಸಲು ಏಳು ದಿನಗಳ ಕಾಲಾವಕಾಶ ನೀಡಿ, "ಸಂಬಂಧಿಸಿದವರ ತಿಳುವಳಿಕೆಗಾಗಿ" ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪತ್ರಿಕಾ ಪ್ರಕಟಣೆ ದಿನಾಂಕ:10.06.2009 ರಂದು ರಾಜ್ಯ ಮಟ್ಟದ ದಿನಪತ್ರಿಕೆಯಾದ ವಿಜಯ ಕರ್ನಾಟಕ ಮತ್ತು ಜಿಲ್ಲಾ ಮಟ್ಟದ ದಿನಪತ್ರಿಕೆಯಾದ ಜನಮಿತ್ರ ಪತ್ರಿಕೆಯಲ್ಲಿ ಪ್ರಚುರಗೊಂಡಿರುತ್ತದೆ. ಪ್ರಚುರಗೊಂಡ ನಂತರದಲ್ಲೂ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಲಿಖಿತ ಮನವಿಯನ್ನು ಸಲ್ಲಿಸಿರುವುದಿಲ್ಲ.

ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಮೊಕದ್ದಮೆಯ ಕೃತ್ಯವು ವಾಹನದ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನವು ಜಫ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದರಿಂದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್

ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾದ್ಯವಾಗಿದ್ದಲ್ಲಿ, ಯಾರೋಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಕೆಳಕಂಡ ಆದೇಶ.

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ತರೀಕೆರೆ ಪೊಲೀಸ್ ಠಾಣೆ, ಇವರ ಕ್ರೈ ನಂ. 97/2008, ದಿನಾಂಕ:12.05.2008 ರಲ್ಲಿ ವಶಪಡಿಸಿಕೊಳ್ಳಲಾದ ವಾಹನ ಸಂಖ್ಯೆ: ಕೆಎ–14–ಹೆಚ್–9588 (ಹಿರೋಹೊಂಡ ಬೈಕ್) ಹಾಗೂ ಮದ್ಯದ ಪೈಕಿ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 8.460 ಲೀಟರ್ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 31ನೇ ಜುಲೈ 2009 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.787

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ನಂ.195/2008–09, ದಿನಾಂಕ:31ನೇ ಜುಲೈ, 2009**

ಅಬಕಾರಿ ನಿರೀಕ್ಷಕರು ತರೀಕೆರೆ ವಲಯ ಪ್ರ.ವ..ವ ನಂ.15/2008–09, ದಿನಾಂಕ:04.01.2009

**ಉಪಸ್ಥಿತರು:** ಕೆ.ಸಿ. ಹರಿದಾಸ್
ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಅಬಕಾರಿ ನಿರೀಕ್ಷಕರು, | ಕೆ.ಎಸ್. ಮಲ್ಲಿಕಾರ್ಜುನ ಬಿನ್ ಶಾಂತಪ್ಪ |
| ತರೀಕೆರೆ ವಲಯ | ಸಾಕಿನ್ ಆಲದಹಳ್ಳಿ ಗ್ರಾಮ, ಕಡೂರು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:04.01.2009 ರಂದು ಬೆಳಿಗ್ಗೆ 9.00 ಗಂಟೆ ಸಮಯದಲ್ಲಿ ಬಂದ ಖಚಿತ ವರ್ತಮಾನದ ಮೇರೆಗೆ ಅಬಕಾರಿ ಉಪ ನಿರೀಕ್ಷಕರು, ತರೀಕೆರೆ ವಲಯ ಇವರು ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ ತರೀಕೆರೆ ತಾಲ್ಲೂಕು ಲಿಂಗದಹಳ್ಳಿ ಹೋಬಳಿ ಹುಲಿತಿಮ್ಮಾಪುರ ಗ್ರಾಮದ ಬಳಿ ರಸ್ತೆ ಗಾವಲು ನಿರ್ವಹಿಸುತ್ತಿರುವಾಗ, ಒಂದು ಬೈಕ್‌ನಲ್ಲಿ ಒಬ್ಬ ವ್ಯಕ್ತಿಯು ಪ್ಲಾಸ್ಟಿಕ್ ಕ್ಯಾನ್‌ಗಳನ್ನು ಕಟ್ಟಿಕೊಂಡು ಬರುತ್ತಿರುವುದನ್ನು ಗಮನಿಸಿ ಅನುಮಾನದ ಮೇರೆಗೆ ತಡೆದು ನಿಲ್ಲಿಸಿ ಪರಿಶೀಲಿಸಿದಾಗ ವಾಹನ ಸಂಖ್ಯೆ: ಎ.ಪಿ. 02– ಹೆಚ್:2645 ರ (ಟಿ.ವಿ.ಎಸ್. ಮ್ಯಾಕ್ಸ್ 100) ಬೈಕ್ ಆಗಿದ್ದು ನಂತರ ಕ್ಯಾನ್‌ಗಳನ್ನು ಪರಿಶೀಲಿಸಿದಾಗ 2 ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಒಟ್ಟು 40 ಲೀಟರ್‌ನಷ್ಟು ಸೇಂದಿ ಇದ್ದು, ಸದರಿ ಸೇಂದಿ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿಯನ್ನು ವಿಚಾರಿಸಿದಾಗ ದಾಖಲಾತಿಗಳನ್ನು ಹಾಜರುಪಡಿಸದೆ ಇದ್ದುದರಿಂದ ಅಕ್ರಮವಾದುದೆಂದು ದೃಢಪಡಿಸಿಕೊಂಡು ಆರೋಪಿ ಕೆ.ಎಸ್. ಮಲ್ಲಿಕಾರ್ಜುನ ಬಿನ್ ಶಾಂತಪ್ಪ ಇವರನ್ನು ದಸ್ತಗಿರಿಗೊಳಿಸಿ ಸೇಂದಿಯೊಂದಿಗೆ ವಾಹನವನ್ನು ಜಪ್ತುಪಡಿಸಿ ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪ್ರ.ವ.ವ. ನಂ. 15/2008–09, ರಲ್ಲಿ ಮೊಕದ್ದಮೆ ದಾಖಲು ಮಾಡಿ, ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೆ ಹಾಗೂ ಈ ಪ್ರಾಧಿಕಾರಕ್ಕೆ ಸಲ್ಲಿಸಿ, ತನಿಖೆಯನ್ನು ಮುಂದುವರೆಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಸೇಂದಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ, ವಾಹನದ ಮಾಲೀಕರಿಗೆ / ಅಪಾದಿತರಿಗೆ ಪ್ರಕರಣದಲ್ಲಿ ಜಪ್ತುಪಡಿಸಿದ ಸೇಂದಿ ಹಾಗೂ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) ಅಡಿಯಲ್ಲಿ ನೋಟಿಸ್ ಜಾರಿ ಮಾಡಲು ಕ್ರಮ ಕೈಗೊಂಡು, ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಚಿಕ್ಕಮಗಳೂರು ಇವರಿಗೆ ಪತ್ರ ಬರೆದು ಪ್ರಕರಣದ ಮುಟ್ಟುಗೋಲಿನ ನಡವಳಿಗಳನ್ನು ಮುಂದುವರೆಸಲಾಯಿತು.

ವಾಹನವು ಜಫ್ತಾಗಿ ಸುಮಾರು ಐದು ತಿಂಗಳು ಕಳೆದರೂ ಈ ಅವಧಿಯಲ್ಲಿ ವಾಹನದ ಕಾನೂನು ಬದ್ಧ ವಾರಸುದಾರರಾಗಲಿ ಅಥವಾ ವಾಹನದ ಮಾಲೀಕರಾಗಲೀ ಯಾರೊಬ್ಬರು ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ಹಕ್ಕು ಸಾಧಿಸದೆ ಇದ್ದುದರಿಂದ, ಅಂತಿಮವಾಗಿ ವಾಹನದ ಮಾಲೀಕರಿಗೆ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಹಾಜರಾಗಿ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಿ ವಾಹನದ ಮೇಲೆ ಹಕ್ಕು ಸಾಧಿಸಲು ಏಳು ದಿನಗಳ ಕಾಲಾವಕಾಶ ನೀಡಿ, "ಸಂಬಂಧಿಸಿದವರ ತಿಳುವಳಿಕೆಗಾಗಿ" ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪತ್ರಿಕಾ ಪ್ರಕಟಣೆ ದಿನಾಂಕ:10.06.2009 ರಂದು ರಾಜ್ಯ ಮಟ್ಟದ ದಿನಪತ್ರಿಕೆಯಾದ ವಿಜಯ ಕರ್ನಾಟಕ ಮತ್ತು ಜಿಲ್ಲಾ ಮಟ್ಟದ ದಿನಪತ್ರಿಕೆಯಾದ ಜನಮಿತ್ರ ಪತ್ರಿಕೆಯಲ್ಲಿ ಪ್ರಚುರಗೊಂಡಿರುತ್ತದೆ. ಪ್ರಚುರಗೊಂಡ ನಂತರದಲ್ಲೂ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಲಿಖಿತ ಮನವಿಯನ್ನು ಸಲ್ಲಿಸಿರುವುದಿಲ್ಲ.

ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಮೊಕದ್ದಮೆಯ ಕೃತ್ಯವು ವಾಹನದ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನವು ಜಫ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದರಿಂದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು

ಹಾಕಿಕೊಳ್ಳಲು ಬಾದ್ಯವಾಗಿದ್ದಲ್ಲಿ, ಯಾರೊಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965 ರ ಕಲಂ 43(ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಕೆಳಕಂಡ ಆದೇಶ.

**"ಆದೇಶ "**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು ತರೀಕೆರೆ ವಲಯ ಪ್ರ.ವ.ವ. ನಂ.15/2008-09, ದಿನಾಂಕ:04.01.2009 ರಲ್ಲಿ ವಶಪಡಿಸಿಕೊಳ್ಳಲಾದ ವಾಹನ ಸಂಖ್ಯೆ: ಎಪಿ-02-ಹೆಚ್-2645 ರ (ಟಿ.ವಿ.ಎಸ್. ಮ್ಯಾಕ್ಸ್ 100) ಹಾಗೂ ಸೇಂದಿ ಪೈಕಿ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 38 ಲೀಟರ್ ಸೇಂದಿಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 31ನೇ ಜುಲೈ 2009 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.788

**ಅಧಿಕೃತ ಅಧಿಕಾರಿ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರ ನ್ಯಾಯಾಲಯ**

**ಸಂ:ಎ3/ಎಫ್‌ಓಸಿ/ಸಿಆರ್-116/04-05, ದಿನಾಂಕ:8ನೇ ಸೆಪ್ಟೆಂಬರ್, 2009**

**ಅಧಿಕೃತ ಜ್ಞಾಪನಾಪತ್ರ**

**ವಿಷಯ:** ಪರವಾನಗಿ ಇಲ್ಲದೆ ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ಸಿಕ್ಕಿಬಿದ್ದ ಟಿವಿಎಸ್ ಮೊಪೆಡ್ ಸಂಖ್ಯೆ: ಕೆಎ06ಅರ್ 7684ರ ಬಗ್ಗೆ.

ಅರಣ್ಯ ಮೊಕದ್ದಮೆ ಸಂಖ್ಯೆ:14/03-04 ದಿನಾಂಕ:01.10.2003 ರಲ್ಲಿ ಟಿವಿಎಸ್ ಮೊಪೆಡ್ ಸಂಖ್ಯೆ: ಕೆಎ06ಅರ್ 7684 ರಲ್ಲಿ ನೆಲಮಂಗಲ ವಲಯದ ಕೃಷ್ಣರಾಜಪುರ ಅರಣ್ಯದಲ್ಲಿ ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದು, ಇಲಾಖಾ ಪರ ಅಮಾನತ್ತುಪಡಿಸಲಾಗಿದೆ.

ಸದರಿ ವಾಹನದ ಮಾಲೀಕತ್ವದ ಬಗ್ಗೆ ಸಹಾಯಕ ಸಾರಿಗೆ ಅಧಿಕಾರಿ, ತುಮಕೂರು ಇವರಿಂದ ದೃಢೀಕರಣ ಪಡೆದು ಈಗಾಗಲೇ ಸಂಬಂಧಪಟ್ಟವರಿಗೆ ನೋಟೀಸ್ ಜಾರಿ ಮಾಡಿ ಹಾಗೂ ದಿನಾಂಕ:03.02.2005 ರಂದು "ಈ ಸಂಜೆ" "ಹೊಸ ದಿಗಂತ" ದಿನಪತ್ರಿಕೆಯಲ್ಲಿ ನೋಟೀಸ್‌ನ ಪ್ರಕಟಣೆ ಜಾರಿಗೊಳಿಸಿ ಶ್ರೀ ಡಿ.ಎಸ್.ನರಸಿಂಹಮೂರ್ತಿ ಬಿನ್ ನರಸೇಗೌಡ, ರಂಗನಾಥಪುರ, ನಾಗವಲ್ಲಿ ಅಂಚೆ, ತುಮಕೂರು ಜಿಲ್ಲೆ ಇವರಿಗೆ ನೀಡಿದ್ದರೂ ಈವರೆವಿಗೂ ಸಂಬಂಧಪಟ್ಟ ದಾಖಲಾತಿಗಳನ್ನು ಈ ಕಛೇರಿಗೆ ಸಲ್ಲಿಸಿರುವುದಿಲ್ಲ. ಹಾಗೂ ನ್ಯಾಯಾಲಯ ಪರ ಯಾವುದೇ ವಕಾಲತ್ತನ್ನು ಹಾಜರಾತಿಪಡಿಸಿರುವುದಿಲ್ಲ. ಆದ್ದರಿಂದ ಏಕಪಕ್ಷೀಯವಾಗಿ ಈ ಕೆಳಸಹಿದಾರರ ಆದೇಶ.

**ಆದೇಶ**

ನೆಲಮಂಗಲ ಅರಣ್ಯ ವಲಯಕ್ಕೆ ಸೇರಿದ ಕೃಷ್ಣರಾಜಪುರ ಅರಣ್ಯ ವ್ಯಾಪ್ತಿಯಲ್ಲಿ ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಟಿವಿಎಸ್ ಮೊಪೆಡ್ ಸಂಖ್ಯೆ: ಕೆಎ06ಅರ್ 7684 ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಂಡು 1963ರ ಕರ್ನಾಟಕ ಅರಣ್ಯ ಕಾಯ್ದೆಯಡಿ ಸೆಕ್ಷನ್ 71ಎ ಮತ್ತು 71ಡಿ ರನ್ವಯ ಮೊಕದ್ದಮೆ ದಾಖಲಾದ 30 ದಿನದೊಳಗೆ ಯಾವುದೇ ಮಾಲೀಕತ್ವದ ದೃಢೀಕರಣವು ಈ ನ್ಯಾಯಾಲಯದಲ್ಲಿ ದೃಢಪಡದೇ ಇರುವುದರಿಂದ ಹಾಗೂ ಆಪಾದಿತನಿಗೆ ಈ ನ್ಯಾಯಾಲಯದಿಂದ ನೋಟೀಸ್ ಜಾರಿ ಮಾಡಿದರೂ ಹಾಜರಾಗದೇ ಇರುವುದು ಸದರಿ ಅಪರಾಧ ಒಪ್ಪಿದಂತೆಯಾದ್ದರಿಂದ ವಶಪಡಿಸಿಕೊಳ್ಳಲಾದ ಶ್ರೀಗಂಧ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಮಾಡಲಾಗಿದೆ. ಈ ಆದೇಶವು ದಿನಾಂಕ:07.09.2009 ರಂದು ಜಾರಿಗೊಳಿಸಲಾಗಿದೆ ಹಾಗೂ ಸಾರ್ವಜನಿಕ ಹರಾಜು ಮೂಲಕ ವಿಲೇವಾರಿ ಮಾಡಲು ಕ್ರಮ ಕೈಗೊಳ್ಳಲು ಆದೇಶಿಸಿದೆ.

ಅಧಿಕೃತ ಅಧಿಕಾರಿ ಮತ್ತು
ಪಿ.ಆರ್.912 ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ನಂ.255/2008-09, ದಿನಾಂಕ:24ನೇ ಜುಲೈ, 2009**

ಅಬಕಾರಿ ಉಪ ನಿರೀಕ್ಷಕರು, ಕೊಪ್ಪ ವಲಯ ಇವರ ಕ್ರೈಂ ಸಂ; 1/2008-09, ದಿನಾಂಕ:12.02.2009

**ಉಪಸ್ಥಿತರು:** ಕೆ.ಸಿ. ಹರಿದಾಸ್
ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಅಬಕಾರಿ ಉಪ ನಿರೀಕ್ಷಕರು, ಕೊಪ್ಪ ವಲಯ. | ಬಿ.ಆರ್. ರಾಘವೇಂದ್ರ ಬಿನ್ ಪುಟ್ಟಪ್ಪಗೌಡ<br>ಸಾಕಿನ್ ಹೊಸೂರು,ತೀರ್ಥಹಳ್ಳಿ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:12.02.2009 ರಂದು ಬೆಳಿಗ್ಗೆ ಸುಮಾರು 10.30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಕೊಪ್ಪ ವಲಯ ಇವರು ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿ ಮತ್ತು ಪಂಚಾಯ್ತಿದಾರರೊಂದಿಗೆ, ಕೊಪ್ಪ ತಾಲ್ಲೂಕು ಗಡಿಕಲ್ಲು ಗ್ರಾಮದ ಅಂಬಿಗುಡಿ ಎಂಬಲ್ಲಿ ಗಸ್ತು ನಿರ್ವಹಿಸುತ್ತಿದ್ದಾಗ, ಒಂದು ಸ್ಕೂಟರ್‌ನಲ್ಲಿ ಎರಡು ತುಂಬಿದ ಪ್ಲಾಸ್ಟಿಕ್ ಕ್ಯಾನ್‌ಗಳನ್ನು ಹೊಂದಿ ಒಬ್ಬ ವ್ಯಕ್ತಿ ಸವಾರಿ ಮಾಡಿಕೊಂಡು ಬರುತ್ತಿರುವುದನ್ನು ಗಮನಿಸಿ, ಅನುಮಾನದ ಮೇರೆಗೆ ತಡೆದು ವಾಹನವನ್ನು ನಿಲ್ಲಿಸಲು ಸೂಚಿಸಿದಾಗ ವಾಹನವನ್ನು ಬಿಟ್ಟು ಓಡಿ ಹೋಗಿದ್ದು, ಹಿಂಬಾಲಿಸಿ ಸಿಗದೆ ಇದ್ದಾಗ ಹಿಂದಿರುಗಿ ತಪಾಸಣೆ ಮಾಡಲಾಗಿ ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಅಂದಾಜು 60 ಲೀಟರ್ ಸೇಂದಿ ಇದ್ದು ಸೇಂದಿ ಸಾಗಾಣಿಕೆಗೆ ಸಂಬಂಧಿಸಿದಂತೆ ಅಧಿಕೃತ

ರಹದಾರಿ ಪತ್ರ ಅಥವಾ ಸಂಬಂಧಿಸಿದ ದಾಖಲಾತಿಗಳನ್ನು ಹಾಜರುಪಡಿಸಲು ಆರೋಪಿ ಓಡಿ ಹೋಗಿದ್ದರಿಂದ ಅಕ್ರಮವಾದುದೆಂದು ದೃಢಪಡಿಸಿಕೊಂಡು ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ದೊರೆತ ಸೇಂದಿಯನ್ನು ವಾಹನ ಸಂಖ್ಯೆ: ಕೆಎ. 19 ಜೆ.:7986 (ಬಜಾಜ್ ಸ್ಕೂಟರ್) ಯೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಓಡಿ ಹೋದ ಆರೋಪಿಯ ಬಗ್ಗೆ ವಿಚಾರಿಸಲಾಗಿ ಬಿ.ಆರ್. ರಾಘವೇಂದ್ರ ಬಿನ್ ಪುಟ್ಟಪ್ಪಗೌಡ, ಗುಡ್ಡೇಕೆರೆ ಹೊಸೂರು ವಾಸ, ತೀರ್ಥಹಳ್ಳಿ ತಾ: ಎಂದು ತಿಳಿದು ಬಂದಿದ್ದು, ಆರೋಪಿಯ ವಿರುದ್ಧ ಕ್ರೈಂ ನಂ.1/2008–09 ರಲ್ಲಿ ಪ್ರಕರಣವನ್ನು ದಾಖಲಿಸಿ ತನಿಖೆ ಮುಂದುವರೆಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಸೇಂದಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಕ್ರಮವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಮಂಗಳೂರು ಮತ್ತು ಚಿಕ್ಕಮಗಳೂರು ಇವರಿಗೆ ಪತ್ರ ಬರೆದು ನಡವಳಿಗಳನ್ನು ಮುಂದುವರೆಸಲಾಯಿತು.

ವಾಹನವು ಜಫ್ತಾಗಿ ಸುಮಾರು ನಾಲ್ಕು ತಿಂಗಳು ಕಳೆದರೂ ಈ ಅವಧಿಯಲ್ಲಿ ವಾಹನದ ಕಾನೂನು ಬದ್ಧ ವಾರಸುದಾರರಾಗಲಿ ಅಥವಾ ವಾಹನದ ಮಾಲೀಕರಾಗಲೀ ಯಾರೊಬ್ಬರು ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ಹಕ್ಕು ಸಾಧಿಸದೆ ಇದ್ದುದರಿಂದ, ಅಂತಿಮವಾಗಿ ವಾಹನದ ಮಾಲೀಕರಿಗೆ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಹಾಜರಾಗಿ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಿ ವಾಹನದ ಮೇಲೆ ಹಕ್ಕು ಸಾಧಿಸಲು ಏಳು ದಿನಗಳ ಕಾಲಾವಕಾಶ ನೀಡಿ, "ಸಂಬಂಧಿಸಿದವರ ತಿಳುವಳಿಕೆಗಾಗಿ" ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪತ್ರಿಕಾ ಪ್ರಕಟಣೆ ದಿನಾಂಕ:10.06.2009 ರಂದು ರಾಜ್ಯ ಮಟ್ಟದ ದಿನಪತ್ರಿಕೆಯಾದ ವಿಜಯ ಕರ್ನಾಟಕ ಮತ್ತು ಜಿಲ್ಲಾ ಮಟ್ಟದ ದಿನಪತ್ರಿಕೆಯಾದ ಜನಮಿತ್ರ ಪತ್ರಿಕೆಯಲ್ಲಿ ಪ್ರಚುರಗೊಂಡಿರುತ್ತದೆ. ಪ್ರಚುರಗೊಂಡ ನಂತರದಲ್ಲೂ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಲಿಖಿತ ಮನವಿಯನ್ನು ಸಲ್ಲಿಸಿರುವುದಿಲ್ಲ.

ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಈ ಪ್ರಕರಣದಲ್ಲಿನ ಆರೋಪಿಯು ಉದ್ದೇಶ ಪೂರ್ವಕವಾಗಿ ಅಕ್ರಮದಲ್ಲಿ ಭಾಗಿಯಾಗಿದ್ದರಿಂದಲೇ ಓಡಿ ಹೋಗಿದ್ದು, ಮೊಕದ್ದಮೆಯ ಕೃತ್ಯವು ವಾಹನದ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನವು ಜಫ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದರಿಂದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965 ರ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾದ್ಯವಾಗಿದ್ದಲ್ಲಿ, ಯಾರೊಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಕೆಳಕಂಡ ಆದೇಶ.

**"ಆದೇಶ "**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಕೊಪ್ಪ ವಲಯ ಇವರ ಕ್ರೈಂ ಸಂ; 1/2008–09, ದಿನಾಂಕ:12.02.2009 ರಲ್ಲಿ ವಶಪಡಿಸಿಕೊಳ್ಳಲಾದ ವಾಹನ ಸಂಖ್ಯೆ: ಕೆಎ–19–ಜೆ–7986 (ಬಜಾಜ್ ಚೇತಕ್ ಸ್ಕೂಟರ್) ಹಾಗೂ ಸೇಂದಿಯ ಪೈಕಿ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 59 ಲೀಟರ್ ಸೇಂದಿಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 24ನೇ ಜುಲೈ 2009 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.760

**ಅಧಿಕಾರಯುತ ಅಧಿಕಾರಿ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ**
**ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**
**ಡಿ.ಟಿ.ಸಿ.ಆರ್. ನಂ.228/2008-09, ದಿನಾಂಕ:24ನೇ ಜುಲೈ, 2009**

ಅಬಕಾರಿ ಉಪ ನಿರೀಕ್ಷಕರು, ನಂ.1, ಕಡೂರು ವಲಯ ಇವರ ಪ್ರ.ವ.ವ. ನಂ.16/2008-09, ದಿನಾಂಕ:10.02.2009

**ಉಪಸ್ಥಿತರು:** ಕೆ.ಸಿ. ಹರಿದಾಸ್
ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಅಬಕಾರಿ ಉಪ ನಿರೀಕ್ಷಕರು, ನಂ.1<br>ಕಡೂರು ವಲಯ. | ಕೆ.ಎಸ್. ಪ್ರಕಾಶ್ ಬಿನ್ ಶಿವಲಿಂಗಪ್ಪ<br>ಸಾಕಿನ್, ಕುಪ್ಪಾಳು, ಕಡೂರು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:10.02.2009 ರಂದು ಬೆಳಿಗ್ಗೆ ಸುಮಾರು 11.00 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು ನಂ.1 ಕಡೂರು ವಲಯ ಇವರು ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿ ಮತ್ತು ಪಂಚಾಯಿತ್ತಿದಾರರೊಂದಿಗೆ, ಕಡೂರು ತಾಲ್ಲೂಕು ಕಸಬಾ ಹೋಬಳಿ ಕುಪ್ಪಾಳಿನಿಂದ ಮಂಗೇನಹಳ್ಳಿಗೆ ಹೋಗುವ ರಸ್ತೆಯಲ್ಲಿರುವ ಗೊಲ್ಲರಹಟ್ಟಿ ಬಳಿ ಗಸ್ತು ನಿರ್ವಹಿಸುತ್ತಿದ್ದಾಗ, ಒಂದು ಹಿರೋಹೊಂಡ ಬೈಕ್‌ನಲ್ಲಿ ಎರಡು ತುಂಬಿದ ಪ್ಲಾಸ್ಟಿಕ್ ಕ್ಯಾನ್‌ಗಳನ್ನು ಹೊಂದಿ ಒಬ್ಬ ವ್ಯಕ್ತಿ ಸವಾರಿ ಮಾಡಿಕೊಂಡು ಬರುತ್ತಿರುವುದನ್ನು ಗಮನಿಸಿ, ಅನುಮಾನದ ಮೇರೆಗೆ ತಡೆದು ವಾಹನವನ್ನು ನಿಲ್ಲಿಸಿ ತಪಾಸಣೆ ಮಾಡಲಾಗಿ ಎರಡು ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ತಲಾ 20 ಲೀಟರ್‌ನಂತೆ 40 ಲೀಟರ್ ಸೇಂದಿ ಇದ್ದು ಸೇಂದಿ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನ ಚಾಲನೆ ಮಾಡುತ್ತಿದ್ದ ವ್ಯಕ್ತಿ ಕೆ.ಎಸ್. ಪ್ರಕಾಶ ಬಿನ್ ಶಿವಲಿಂಗಪ್ಪ ಇವರು ಅಧಿಕೃತ ರಹದಾರಿ ಪತ್ರ ಅಥವಾ ಸಂಬಂಧಿಸಿದ ದಾಖಲಾತಿಗಳನ್ನು ಹಾಜರುಪಡಿಸದೆ ಇದ್ದುದರಿಂದ ಅಕ್ರಮವಾದುದೆಂದು ದೃಢಪಡಿಸಿಕೊಂಡು ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ದೊರೆತ ಸೇಂದಿಯನ್ನು ವಾಹನ ಸಂಖ್ಯೆ: ಕೆಎ. 18 ಜೆ.:9707 (ಹಿರೋಹೊಂಡ ಫ್ಯಾಷನ್ ಬೈಕ್) ನೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಯನ್ನು ದಸ್ತಗಿರಿಗೊಳಿಸಿ, ಕ್ರೈಂ ನಂ.16/2008-09 ರಲ್ಲಿ ಪ್ರಕರಣವನ್ನು ದಾಖಲಿಸಿ ತನಿಖೆ ಮುಂದುವರೆಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಸೇಂದಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರಿಗೆ ಪತ್ರ ಬರೆದು ನಡವಳಿಗಳನ್ನು ಮುಂದುವರೆಸಲಾಯಿತು.

ವಾಹನವು ಜಫ್ತಾಗಿ ಸುಮಾರು ನಾಲ್ಕು ತಿಂಗಳು ಕಳೆದರೂ ಈ ಅವಧಿಯಲ್ಲಿ ವಾಹನದ ಕಾನೂನು ಬದ್ಧ ವಾರಸುದಾರರಾಗಲಿ ಅಥವಾ ವಾಹನದ ಮಾಲೀಕರಾಗಲೀ ಯಾರೊಬ್ಬರು ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ಹಕ್ಕು ಸಾಧಿಸದೆ ಇದ್ದುದರಿಂದ, ಅಂತಿಮವಾಗಿ ವಾಹನದ ಮಾಲೀಕರಿಗೆ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಹಾಜರಾಗಿ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಿ ವಾಹನದ ಮೇಲೆ ಹಕ್ಕು ಸಾಧಿಸಲು ಏಳು ದಿನಗಳ ಕಾಲಾವಕಾಶ ನೀಡಿ, " ಸಂಬಂಧಿಸಿದವರ ತಿಳುವಳಿಕೆಗಾಗಿ " ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪತ್ರಿಕಾ ಪ್ರಕಟಣೆ ದಿನಾಂಕ:10.06.2009 ರಂದು ರಾಜ್ಯ ಮಟ್ಟದ ದಿನಪತ್ರಿಕೆಯಾದ ವಿಜಯ ಕರ್ನಾಟಕ ಮತ್ತು ಜಿಲ್ಲಾ ಮಟ್ಟದ ದಿನಪತ್ರಿಕೆಯಾದ ಜನಮಿತ್ರ ಪತ್ರಿಕೆಯಲ್ಲಿ ಪ್ರಚುರಗೊಂಡಿರುತ್ತದೆ. ಪ್ರಚುರಗೊಂಡ ನಂತರದಲ್ಲೂ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಲಿಖಿತ ಮನವಿಯನ್ನು ಸಲ್ಲಿಸಿರುವುದಿಲ್ಲ.

ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಮೊಕದ್ದಮೆಯ ಕೃತ್ಯವು ವಾಹನದ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನವು ಜಫ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ

ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದರಿಂದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾದ್ಯವಾಗಿದ್ದಲ್ಲಿ, ಯಾರೋಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಕೆಳಕಂಡ ಆದೇಶ.

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ನಂ.1, ಕಡೂರು ವಲಯ ಇವರ ಪ್ರ.ವ.ವ. ನಂ.16/2008–09, ದಿನಾಂಕ: 10–02–2009 ರಲ್ಲಿ ವಶಪಡಿಸಿಕೊಳ್ಳಲಾದ ವಾಹನ ಸಂಖ್ಯೆ: ಕೆಎ. 18 ಜೆ.:9707 (ಹಿರೋಹೊಂಡ ಫ್ಯಾಷನ್ ಬೈಕ್) ಹಾಗೂ ಸೇಂದಿಯ ಪೈಕಿ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 39 ಲೀಟರ್ ಸೇಂದಿಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 24ನೇ ಜುಲೈ 2009 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.761

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ**
**ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**
**ಡಿ.ಟಿ.ಸಿ.ಆರ್. ನಂ.319/2008–09, ದಿನಾಂಕ:24ನೇ ಜುಲೈ, 2009**

ಅಬಕಾರಿ ನಿರೀಕ್ಷಕರು, ತರೀಕೆರೆ ವಲಯ ಇವರ ಪ್ರ.ವ.ವ. ಸಂ:22/2008–09, ದಿನಾಂಕ:29.03.2009

**ಉಪಸ್ಥಿತರು:** ಕೆ.ಸಿ. ಹರಿದಾಸ್
ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಅಬಕಾರಿ ನಿರೀಕ್ಷಕರು, ತರೀಕೆರೆ ವಲಯ. | ಚಂದ್ರ ಮತ್ತು ಇತರರು |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:29.03.2009 ರಂದು ಬೆಳಿಗ್ಗೆ ಸುಮಾರು 7.00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ತರೀಕೆರೆ ವಲಯ ಇವರು ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿ ಮತ್ತು ಪಂಚಾಯ್ತಿದಾರರೊಂದಿಗೆ, ತರೀಕೆರೆ ತಾಲ್ಲೂಕು ಕಸಬಾ ಹೋಬಳಿ ಬಿ.ಹೆಚ್. ರಸ್ತೆಯ ಚಾಕೋನಹಳ್ಳಿಗೆ ಹೋಗುವ ರಸ್ತೆಯ ರೈಲ್ವೆ ಗೇಟ್ ಹತ್ತಿರ ರಸ್ತೆ ಕಾವಲು ನಿರ್ವಹಿಸುತ್ತಿದ್ದಾಗ, ಒಂದು ಬೈಕ್‌ನಲ್ಲಿ ಇಬ್ಬರು ವ್ಯಕ್ತಿಗಳು ಒಂದು ತುಂಬಿದ ಪ್ಲಾಸ್ಟಿಕ್ ಕ್ಯಾನ್ ಅನ್ನು ಹೊಂದಿ ಬರುತ್ತಿರುವುದನ್ನು ಗಮನಿಸಿ, ಅನುಮಾನದ ಮೇರೆಗೆ ತಡೆದು ವಾಹನವನ್ನು ನಿಲ್ಲಿಸಲು ಸೂಚಿಸಿದಾಗ ವಾಹನವನ್ನು ಬಿಟ್ಟು ಓಡಿ ಹೋಗಿದ್ದು, ಹಿಂಬಾಲಿಸಿ ಸಿಗದೆ ಇದ್ದಾಗ ಹಿಂದಿರುಗಿ ತಪಾಸಣೆ ಮಾಡಲಾಗಿ ಪ್ಲಾಸ್ಟಿಕ್ ಕ್ಯಾನ್‌ನಲ್ಲಿ ಅಂದಾಜು 20 ಲೀಟರ್ ಸೇಂದಿ ಇದ್ದು ಸೇಂದಿ ಸಾಗಾಣಿಕೆಗೆ ಸಂಬಂಧಿಸಿದಂತೆ ಅಧಿಕೃತ ರಹದಾರಿ ಪತ್ರ ಅಥವಾ ಸಂಬಂಧಿಸಿದ ದಾಖಲಾತಿಗಳನ್ನು ಹಾಜರುಪಡಿಸಲು

ಆರೋಪಿಗಳು ಓಡಿ ಹೋಗಿದ್ದರಿಂದ ಅಕ್ರಮವಾದುದೆಂದು ದೃಢಪಡಿಸಿಕೊಂಡು ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ದೊರೆತ ಸೇಂದಿಯನ್ನು ವಾಹನ ಸಂಖ್ಯೆ: ಕೆಎ–14–ಜೆ–1589 (ಸುಜುಕಿ ಸಮುರಾಯ್ ಬೈಕ್) ಯೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಓಡಿ ಹೋದ ಆರೋಪಿಗಳ ಬಗ್ಗೆ ವಿಚಾರಿಸಲಾಗಿ ಚಂದ್ರ ತಂದೆಯ ಹೆಸರು ತಿಳಿದಿರುವುದಿಲ್ಲ, ಹಳೆಯೂರು ವಾಸ, ಇನ್ನೊಬ್ಬ ವ್ಯಕ್ತಿ ಶ್ರೀನಿವಾಸ ಬಿನ್ ಬಂದಪ್ಪ, ಚಾಕೋನಹಳ್ಳಿ, ತರೀಕೆರೆ ತಾಲ್ಲೂಕು ಎಂದು ತಿಳಿದು ಬಂದಿದ್ದು, ಆರೋಪಿಗಳ ವಿರುದ್ಧ ಕ್ರೈಂ ನಂ.22/2008–09 ರಲ್ಲಿ ಪ್ರಕರಣವನ್ನು ದಾಖಲಿಸಿ ತನಿಖೆ ಮುಂದುವರೆಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಸೇಂದಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಕ್ರಮವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿವಮೊಗ್ಗ ಮತ್ತು ಚಿಕ್ಕಮಗಳೂರು ಇವರಿಗೆ ಪತ್ರ ಬರೆದು ನಡವಳಿಗಳನ್ನು ಮುಂದುವರೆಸಲಾಯಿತು.

ವಾಹನವು ಜಫ್ತಾಗಿ ಸುಮಾರು ಮೂರು ತಿಂಗಳು ಕಳೆದರೂ ಈ ಅವಧಿಯಲ್ಲಿ ವಾಹನದ ಕಾನೂನು ಬದ್ಧ ವಾರಸುದಾರರಾಗಲಿ ಅಥವಾ ವಾಹನದ ಮಾಲೀಕರಾಗಲೀ ಯಾರೊಬ್ಬರು ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ಹಕ್ಕು ಸಾಧಿಸದೆ ಇದ್ದುದರಿಂದ, ಅಂತಿಮವಾಗಿ ವಾಹನದ ಮಾಲೀಕರಿಗೆ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಹಾಜರಾಗಿ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಿ ವಾಹನದ ಮೇಲೆ ಹಕ್ಕು ಸಾಧಿಸಲು ಏಳು ದಿನಗಳ ಕಾಲಾವಕಾಶ ನೀಡಿ, **"ಸಂಬಂಧಿಸಿದವರ ತಿಳುವಳಿಕೆಗಾಗಿ"** ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪತ್ರಿಕಾ ಪ್ರಕಟಣೆ ದಿನಾಂಕ:10.06.2009 ರಂದು ರಾಜ್ಯ ಮಟ್ಟದ ದಿನಪತ್ರಿಕೆಯಾದ ವಿಜಯ ಕರ್ನಾಟಕ ಮತ್ತು ಜಿಲ್ಲಾ ಮಟ್ಟದ ದಿನಪತ್ರಿಕೆಯಾದ ಜನಮಿತ್ರ ಪತ್ರಿಕೆಯಲ್ಲಿ ಪ್ರಚುರಗೊಂಡಿರುತ್ತದೆ. ಪ್ರಚುರಗೊಂಡ ನಂತರದಲ್ಲೂ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಲಿಖಿತ ಮನವಿಯನ್ನು ಸಲ್ಲಿಸಿರುವುದಿಲ್ಲ.

ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಈ ಪ್ರಕರಣದಲ್ಲಿನ ಆರೋಪಿಗಳು ಉದ್ದೇಶ ಪೂರ್ವಕವಾಗಿ ಅಕ್ರಮದಲ್ಲಿ ಭಾಗಿಯಾಗಿದ್ದರಿಂದಲೇ ಓಡಿ ಹೋಗಿದ್ದು, ಮೊಕದ್ದಮೆಯ ಕೃತ್ಯವು ವಾಹನದ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನವು ಜಫ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದರಿಂದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾದ್ಯವಾಗಿದ್ದಲ್ಲಿ, ಯಾರೊಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಕೆಳಕಂಡ ಆದೇಶ.

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ತರೀಕೆರೆ ವಲಯ ಇವರ ಪ್ರ.ವ.ವ. ಸಂ:22/2008–09, ದಿನಾಂಕ:29.03.2009 ರಲ್ಲಿ ವಶಪಡಿಸಿಕೊಳ್ಳಲಾದ ವಾಹನ ಸಂಖ್ಯೆ: ಕೆಎ–14–ಜೆ–1589 (ಸುಜುಕಿ ಸಮುರಾಯ್ ಬೈಕ್) ಹಾಗೂ ಸೇಂದಿಯ ಪೈಕಿ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 19 ಲೀಟರ್ ಸೇಂದಿಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 24ನೇ ಜುಲೈ 2009 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.762

## ಅಧಿಕಾರಯುತ ಅಧಿಕಾರಿ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ

**ಡಿ.ಟಿ.ಸಿ.ಆರ್. ನಂ.157/2008–09, ದಿನಾಂಕ:24ನೇ ಜುಲೈ, 2009**

ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರ ಪ್ರ.ವ.ವ. ನಂ.8/2008–09, ದಿನಾಂಕ:16.12.2008

**ಉಪಸ್ಥಿತರು:** ಕೆ.ಸಿ. ಹರಿದಾಸ್

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಅಬಕಾರಿ ನಿರೀಕ್ಷಕರು, ಕಡೂರು ವಲಯ. | ಮಹೇಶ್ ಬಿನ್ ಗೋವಿಂದಪ್ಪ ಮತ್ತು ಇತರರು |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:16.12.2008 ರಂದು ಬೆಳಿಗ್ಗೆ ಸುಮಾರು 6.30 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರು ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿ ಮತ್ತು ಪಂಚಾಯ್ತಿದಾರರೊಂದಿಗೆ, ಕಡೂರು ತಾಲ್ಲೂಕು ಕಸಬಾ ಹೋಬಳಿ ಎನ್.ಹೆಚ್. 206 ರಸ್ತೆಯ ಬೀರನಹಳ್ಳಿಗೆ ಹೋಗುವ ರಸ್ತೆ ಕ್ರಾಸ್‌ನಲ್ಲಿ ರಸ್ತೆ ಕಾವಲು ನಡೆಸುತ್ತಿದ್ದಾಗ, ಕುರುಬರಹಳ್ಳಿ ತಾಂಡ್ಯ ಕಡೆಯಿಂದ ಎರಡು ಮೋಟಾರ್ ಬೈಕ್‌ನಲ್ಲಿ ಮೂರು ಜನ ವ್ಯಕ್ತಿಗಳು ತುಂಬಿದ ಪ್ಲಾಸ್ಟಿಕ್ ಕ್ಯಾನ್‌ಗಳನ್ನು ಹೊಂದಿ ಬರುತ್ತಿರುವುದನ್ನು ಗಮನಿಸಿ, ಅನುಮಾನದ ಮೇರೆಗೆ ವಾಹನಗಳನ್ನು ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ಮೊದಲನೇ ವಾಹನ ಸಂಖ್ಯೆ: ಎಪಿ–02–ಆರ್–1828 (ಟಿ.ವಿಎಸ್. ಫ್ಲೇಮ್ ಬೈಕ್) ನಲ್ಲಿ ಎರಡು ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ತಲಾ 20 ಲೀಟರ್‌ನಂತೆ 40 ಲೀಟರ್ ಸೇಂದಿ ಇದ್ದು, ವಾಹನ ಚಾಲನೆ ಮಾಡುತ್ತಿದ್ದ ವ್ಯಕ್ತಿ ಮಹೇಶ್ ಬಿನ್ ಗೋವಿಂದಪ್ಪ, ಜಿ. ಕಾರೇಹಳ್ಳಿ ವಾಸ, ಕಸಬಾ ಹೋಬಳಿ, ಕಡೂರು ತಾ: ಮತ್ತೊಬ್ಬ ವ್ಯಕ್ತಿ ರಾಜು ಬಿನ್ ಗೋವಿಂದಪ್ಪ, ಜಿ. ಕಾರೇಹಳ್ಳಿ ವಾಸ, ಕಸಬಾ ಹೋಬಳಿ ಇವರುಗಳು ಹಾಗೂ ಮತ್ತೊಂದು ಬೈಕ್ ಸಂಖ್ಯೆ: ಕೆಎ–02–ಇಸಿ–8523 (ಯಮಹ ಕ್ರಕ್ಸ್ ಬೈಕ್) ನಲ್ಲಿ ಎರಡು ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ತಲಾ 20 ಲೀಟರ್‌ನಂತೆ 40 ಲೀಟರ್ ಸೇಂದಿ ಇದ್ದು, ಇದರಲ್ಲಿದ್ದ ವ್ಯಕ್ತಿ ಈಶನಾಯ್ಕ್ ಅಲಿಯಾಸ್ ನಾನ್ಯಾನಾಯ್ಕ್ ಬಿನ್ ಲೇಟ್ ತಾವರೆ ನಾಯ್ಕ್, ಕುರುಬರಹಳ್ಳಿ ತಾಂಡ್ಯ ವಾಸಿ, ಕಡೂರು ತಾಲ್ಲೂಕು ಇವರುಗಳು ಸೇಂದಿ ಸಾಗಾಣಿಕೆಗೆ ಸಂಬಂಧಿಸಿದಂತೆ ಅಧಿಕೃತ ರಹದಾರಿ ಪತ್ರ ಅಥವಾ ಸಂಬಂಧಿಸಿದ ದಾಖಲಾತಿಗಳನ್ನು ಹಾಜರುಪಡಿಸದೆ ಇದ್ದುದರಿಂದ ಅಕ್ರಮವಾದುದೆಂದು ದೃಢಪಡಿಸಿಕೊಂಡು ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ದೊರೆತ ಸೇಂದಿಯನ್ನು ಎರಡು ಬೈಕ್‌ಗಳು ಹಾಗೂ ಇನ್ನಿತರೆ ವಸ್ತುಗಳೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿಗೊಳಿಸಿ, ಕ್ರೈಂ ನಂ. 8/2008–09 ರಲ್ಲಿ ಪ್ರಕರಣವನ್ನು ದಾಖಲಿಸಿ ತನಿಖೆ ಮುಂದುವರೆಸಿರುತ್ತಾರೆ.

ವಶಪಡಿಸಿಕೊಂಡ ವಾಹನಗಳು ಹಾಗೂ ಸೇಂದಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಮತ್ತು ಚಿಕ್ಕಮಗಳೂರು ಇವರಿಗೆ ಪತ್ರ ಬರೆದು ನಡವಳಿಗಳನ್ನು ಮುಂದುವರೆಸಲಾಯಿತು.

ವಾಹನಗಳು ಜಫ್ತಾಗಿ ಸುಮಾರು ಆರು ತಿಂಗಳು ಕಳೆದರೂ ಈ ಅವಧಿಯಲ್ಲಿ ವಾಹನಗಳ ಕಾನೂನು ಬದ್ಧ ವಾರಸುದಾರರಾಗಲಿ ಅಥವಾ ವಾಹನಗಳ ಮಾಲೀಕರಾಗಲೀ ಯಾರೊಬ್ಬರು ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ಹಕ್ಕು ಸಾಧಿಸದೆ ಇದ್ದುದರಿಂದ, ಅಂತಿಮವಾಗಿ ವಾಹನಗಳ ಮಾಲೀಕರಿಗೆ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಹಾಜರಾಗಿ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಿ ವಾಹನದ ಮೇಲೆ ಹಕ್ಕು ಸಾಧಿಸಲು ಏಳು ದಿನಗಳ ಕಾಲಾವಕಾಶ ನೀಡಿ, "ಸಂಬಂಧಿಸಿದವರ ತಿಳುವಳಿಕೆಗಾಗಿ" ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪತ್ರಿಕಾ ಪ್ರಕಟಣೆ ದಿನಾಂಕ:10.06.2009 ರಂದು ರಾಜ್ಯ ಮಟ್ಟದ ದಿನಪತ್ರಿಕೆಯಾದ ವಿಜಯ ಕರ್ನಾಟಕ ಮತ್ತು ಜಿಲ್ಲಾ ಮಟ್ಟದ ದಿನಪತ್ರಿಕೆಯಾದ ಜನಮಿತ್ರ ಪತ್ರಿಕೆಯಲ್ಲಿ ಪ್ರಚುರಗೊಂಡಿರುತ್ತದೆ. ಪ್ರಚುರಗೊಂಡ ನಂತರದಲ್ಲೂ ವಾಹನಗಳ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಲಿಖಿತ ಮನವಿಯನ್ನು ಸಲ್ಲಿಸಿರುವುದಿಲ್ಲ.

ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಮೊಕದ್ದಮೆಯ ಕೃತ್ಯವು ವಾಹನಗಳ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನಗಳು ಜಫ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದರಿಂದ ವಾಹನಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನಗಳ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾದ್ಯವಾಗಿದ್ದಲ್ಲಿ, ಯಾರೋಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಕೆಳಕಂಡ ಆದೇಶ.

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರ ಪ್ರ.ವ.ವ. ನಂ.8/2008–09, ದಿನಾಂಕ: 16–12–2008 ರಲ್ಲಿ ವಶಪಡಿಸಿಕೊಳ್ಳಲಾದ ವಾಹನಗಳ ಸಂಖ್ಯೆ: ಎಪಿ–02–ಆರ್–1828 (ಟಿ.ವಿಎಸ್. ಫ್ಲೇಮ್ ಬೈಕ್) ಹಾಗೂ ಕೆಎ–02–ಇಸಿ–8523 (ಯಮಹ ಕ್ರಕ್ಸ್ ಬೈಕ್)ಗಳನ್ನು, ಸೇಂದಿಯ ಪೈಕಿ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 78 ಲೀಟರ್ ಸೇಂದಿ ಹಾಗೂ ಎರಡು ಸೇಂದಿ ತಯಾರಿಸಲು ಬಳಸುವ ಕಬ್ಬಿಣದ ಕತ್ತಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 24ನೇ ಜುಲೈ 2009 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.763

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ನಂ. 24/2008–09, ದಿನಾಂಕ:26ನೇ ಜೂನ್, 2009**

ಪೊಲೀಸ್ ಉಪ ನಿರೀಕ್ಷಕರು, ಸಖರಾಯಪಟ್ಟಣ ಪೊಲೀಸ್ ಠಾಣೆ ಕ್ರೈಂ ಸಂಖ್ಯೆ: 12/2008, ದಿನಾಂಕ:29.01.2008

**ಉಪಸ್ಥಿತರು:** ಕೆ.ಸಿ. ಹರಿದಾಸ್

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಪೊಲೀಸ್ ಉಪ ನಿರೀಕ್ಷಕರು,<br>ಸಖರಾಯಪಟ್ಟಣ ಪೊಲೀಸ್ ಠಾಣೆ. | ಪ್ರಸನ್ನ ಬಿನ್ ಮಂಜೇಹಳ್ಳಿ ಸಣ್ಣಪ್ಪ ಮತ್ತು ಇತರರು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:29.01.2008 ರಂದು ರಾತ್ರಿ ಪೊಲೀಸ್ ಉಪ ನಿರೀಕ್ಷಕರು, ಸಖರಾಯಪಟ್ಟಣ ಪೊಲೀಸ್ ಠಾಣೆ ಇವರು ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿ ಮತ್ತು ಪಂಚಾಯ್ತಿದಾರರೊಂದಿಗೆ, ಜೋಡಿಲಿಂಗದಹಳ್ಳಿ–ಸಿದ್ಧಾಪುರ ಮಧ್ಯೆ ಟಾರ್ ರಸ್ತೆಯಲ್ಲಿ ಗಸ್ತು ನಿರ್ವಹಿಸುತ್ತಿದ್ದಾಗ, ಜಾವಗಲ್ ಕಡೆಯಿಂದ ಒಂದು ಜೀಪ್ ಬರುತ್ತಿರುವುದನ್ನು ಗಮನಿಸಿ, ಅನುಮಾನದ ಮೇರೆಗೆ ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ಜೀಪಿನ ಒಳಭಾಗದಲ್ಲಿ 4 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿಯ 192 ಸೀಸೆ ರಾಜಾವಿಸ್ಕಿ ಬಾಟಲುಗಳಿದ್ದು ಇವುಗಳ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿಗಳಾದ (1) ಪ್ರಸನ್ನ ಬಿನ್ ಮಂಜಿಹಳ್ಳಿ ಸಣ್ಣಪ್ಪ, (ಓಡಿಹೋಗಿರುತ್ತಾನೆ) (2) ಬಿ.ಆರ್. ತಿಮ್ಮಶೆಟ್ಟಿ ಬಿನ್ ರಂಗಶೆಟ್ಟಿ, ಜೋಡಿಲಿಂಗದಹಳ್ಳಿ, (3) ಹೆಚ್.ಸಿ. ತಮ್ಮಯ್ಯ ಬಿನ್ ಚೌಡಪ್ಪ, ಹುಲಿಕೆರೆ, (4) ಎಸ್.ಎಸ್. ಸೋಮಶೇಖರ್ ಬಿನ್ ಶಂಕರಪ್ಪ, ವಾಹನ ಚಾಲಕ ಸಿದ್ಧಾಪುರ ಇವರುಗಳು ಯಾವುದೇ ಅಧಿಕೃತ ರಹದಾರಿ ಪತ್ರಗಳನ್ನಾಗಲಿ ಅಥವಾ ದಾಖಲಾತಿ ಪತ್ರಗಳನ್ನಾಗಲಿ ಹಾಜರುಪಡಿಸದೆ ಇದ್ದುದರಿಂದ, ಅಕ್ರಮವಾದುದೆಂದು ದೃಢಪಡಿಸಿಕೊಂಡು, ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ದೊರೆತ ಮದ್ಯವನ್ನು ವಾಹನ ಸಂಖ್ಯೆ: ಕೆಎ–02–ಎಂ–1503 (ಜೀಪ್) ನೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿಗೊಳಿಸಿ ಕ್ರೈಂ ನಂ.12/2008 ರಲ್ಲಿ ಪ್ರಕರಣವನ್ನು ದಾಖಲಿಸಿ ವಶಪಡಿಸಿಕೊಂಡ ವಾಹನ ಮತ್ತು ಮದ್ಯವನ್ನು ಮುಂದಿನ ವಿಲೇವಾರಿ ಕುರಿತು ಈ ಪ್ರಾಧಿಕಾರದ ಅನುಮತಿ ಪಡೆದು ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಕ್ರಮವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ರಾಜಾಜಿನಗರ ಬೆಂಗಳೂರು ಮತ್ತು ಚಿಕ್ಕಮಗಳೂರು ಇವರಿಗೆ ಪತ್ರ ಬರೆದಿದ್ದು, ವಾಹನದ ತಿರುವಳಿ ಪತ್ರವನ್ನು ಹಾಸನ ಪ್ರಾದೇಶಿಕ ಸಾರಿಗೆ ಕಛೇರಿಗೆ ಕಳುಹಿಸಿರುವ ಬಗ್ಗೆ ವಿವರ ಲಭ್ಯವಾದ ಮೇರೆಗೆ ಹಾಸನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಮಾಲೀಕತ್ವದ ವಿವರ ಕೋರಿ ಪತ್ರ ಬರೆದು ನಡವಳಿಗಳನ್ನು ಮುಂದುವರೆಸಲಾಯಿತು.

ವಾಹನವು ಜಫ್ತಾಗಿ ಸುಮಾರು ಒಂದು ವರ್ಷ ಐದು ತಿಂಗಳು ಕಳೆದರೂ ಈ ಅವಧಿಯಲ್ಲಿ ವಾಹನದ ಕಾನೂನು ಬದ್ಧ ವಾರಸುದಾರರಾಗಲಿ ಅಥವಾ ವಾಹನದ ಮಾಲೀಕರಾಗಲೀ ಯಾರೊಬ್ಬರು ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ಹಕ್ಕು ಸಾಧಿಸದೆ ಇದ್ದುದರಿಂದ, ಅಂತಿಮವಾಗಿ ವಾಹನದ ಮಾಲೀಕರಿಗೆ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಹಾಜರಾಗಿ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಿ ವಾಹನದ ಮೇಲೆ ಹಕ್ಕು ಸಾಧಿಸಲು ಏಳು ದಿನಗಳ ಕಾಲಾವಕಾಶ ನೀಡಿ, **"ಸಂಬಂಧಿಸಿದವರ ತಿಳುವಳಿಕೆಗಾಗಿ"** ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪತ್ರಿಕಾ ಪ್ರಕಟಣೆ ದಿನಾಂಕ:10.06.2009 ರಂದು ರಾಜ್ಯ ಮಟ್ಟದ ದಿನಪತ್ರಿಕೆಯಾದ ವಿಜಯ ಕರ್ನಾಟಕ ಮತ್ತು ಜಿಲ್ಲಾ ಮಟ್ಟದ ದಿನಪತ್ರಿಕೆಯಾದ ಜನಮಿತ್ರ ಪತ್ರಿಕೆಯಲ್ಲಿ ಪ್ರಚುರಗೊಂಡಿರುತ್ತದೆ. ಪ್ರಚುರಗೊಂಡ ನಂತರದಲ್ಲೂ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಲಿಖಿತ ಮನವಿಯನ್ನು ಸಲ್ಲಿಸಿರುವುದಿಲ್ಲ.

ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಮೊಕದ್ದಮೆಯ ಕೃತ್ಯವು ವಾಹನದ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನವು ಜಫ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದರಿಂದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆಬಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965 ರ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾದ್ಯವಾಗಿದ್ದಲ್ಲಿ, ಯಾರೊಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ

